## ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀ ಬಿ. ಜಿ. ಪಾಟೀಲ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 384

ಉತ್ತರ ದಿನಾಂಕ : 11.12.2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಲಬುರಗಿ ಮತ್ತು ಯಾದಗಿರಿ ಜಿಲ್ಲೆಯ ಅನೇಕ ಹಳ್ಳಿಗಳಲ್ಲಿ ಶುದ್ಧ ಕುಡಿಯುವ ನೀರಿನ ಘಟಕಗಳನ್ನು ಸ್ಥಾಪಿಸಲಾಗಿದ್ದು ಬಹುತೇಕ ಘಟಕಗಳು ನಿರ್ವಹಣೆ ಇಲ್ಲದೆ ಬಂದ್ ಆಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ) | ಬಂದಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮಗಳೇನು; (ವಿವರ ನೀಡುವುದು) | **ಕಲಬುರಗಿ ಜಿಲ್ಲೆ:**<br>ಕಲಬುರಗಿ ಜಿಲ್ಲೆಗೆ ಒಟ್ಟು 469 ಶುದ್ಧ ಕುಡಿಯುವ ನೀರಿನ ಘಟಕಗಳು ಮಂಜೂರಾಗಿದ್ದು, 443 ಘಟಕಗಳನ್ನು ಅನುಷ್ಠಾನಗೊಳಿಸಲಾಗಿರುತ್ತದೆ ಹಾಗೂ 26 ಘಟಕಗಳು ಪ್ರಗತಿಯಲ್ಲಿರುತ್ತವೆ. ಅನುಷ್ಠಾನಗೊಳಿಸಲಾದ 443 ಘಟಕಗಳ ಪೈಕಿ 273 ಘಟಕಗಳು ಕಾರ್ಯನಿರ್ವಹಿಸುತ್ತಿದ್ದು, 170 ಘಟಕಗಳು ಸರಿಯಾದ ನಿರ್ವಹಣೆ ಇಲ್ಲದೆ ಕಾರ್ಯನಿರ್ವಹಿಸುತ್ತಿರುವುದಿಲ್ಲ.<br>ಕಾರ್ಯನಿರ್ವಹಿಸದಿರುವ 170 ಘಟಕಗಳ ಪೈಕಿ, ಅಂತರ್ಗತ (In-built) O&M ಅಡಿ ಹಾಗೂ ಪ್ರತ್ಯೇಕ O&M ಅಡಿ ಇರುವ ಘಟಕಗಳ ವಿವರಗಳು **ಅನುಬಂಧ-1ರಲ್ಲಿ** ಲಗತ್ತಿಸಿದೆ.<br>ಈ 170 ಘಟಕಗಳ ಪೈಕಿ,<br>1. ಅಂತರ್ಗತ (In-built) O&M ಅಡಿ ಇರುವ 102 ಘಟಕಗಳನ್ನು ಸುಸ್ಥಿತಿಯಲ್ಲಿಡುವಂತೆ ಆಯಾ ಏಜೆನ್ಸಿಗಳಿಗೆ ನೋಟಿಸು ನೀಡಿ ಘಟಕಗಳನ್ನು ಚಾಲನೆಗೊಳಿಸಲು ಸೂಚಿಸಲಾಗಿದ್ದು, ಈ ಪೈಕಿ 9 ಘಟಕಗಳು ಪೂರ್ಣವಾಗಿ ದುರಸ್ಥಿಯಲ್ಲಿರುವುದರಿಂದ ಇವುಗಳನ್ನು ಸ್ಕ್ರ್ಯಾಪ್ ಎಂದು ಪರಿಗಣಿಸುವ ಕುರಿತು ವಿಶ್ಲೇಷಿಸಲಾಗುತ್ತಿದೆ.<br>2. KRIDL & Co-operative society ವತಿಯಿಂದ ಹಸ್ತಾಂತರಿಸಿಕೊಂಡಿರುವ 68 ಘಟಕಗಳ ಪೈಕಿ, 36 ಘಟಕಗಳ ದುರಸ್ಥಿಯನ್ನು ಟೆಂಡರ್ ಮುಖಾಂತರ ಪ್ರತ್ಯೇಕ ಏಜೆನ್ಸಿಗಳಿಗೆ ವಹಿಸಲಾಗಿದ್ದು, ದುರಸ್ಥಿ ಕಾಮಗಾರಿಗಳು ಪ್ರಗತಿಯಲ್ಲಿರುತ್ತದೆ. ಉಳಿದ 32 ಘಟಕಗಳ ದುರಸ್ಥಿ ಕಾಮಗಾರಿಗಳಿಗಾಗಿ ಶೀಘ್ರವಾಗಿ ಟೆಂಡರ ಕರೆದು ಚಾಲನೆಗೊಳಿಸಲಾಗುವುದು. ಈ 68 ಘಟಕಗಳ ದುರಸ್ಥಿಯ ನಂತರ ನಿರ್ವಹಣೆಗಾಗಿ ಆಯಾ ಗ್ರಾಮ ಪಂಚಾಯಿತಿಗಳಗೆ ಹಸ್ತಾಂತರಿಸಲು ಕ್ರಮ ವಹಿಸಲಾಗುವುದು.<br>**ಯಾದಗಿರಿ ಜಿಲ್ಲೆ:**<br>ಯಾದಗಿರಿ ಜಿಲ್ಲೆಗೆ ಒಟ್ಟು 415 ಶುದ್ಧ ಕುಡಿಯುವ ನೀರಿನ ಘಟಕಗಳು ಮಂಜೂರಾಗಿದ್ದು, ಎಲ್ಲಾ 415 ಘಟಕಗಳನ್ನು ಅನುಷ್ಠಾನಗೊಳಿಸಲಾಗಿದೆ. ಇವುಗಳ ಪೈಕಿ 321 ಘಟಕಗಳು |

| | | |
|---|---|---|
| | | ಕಾರ್ಯ ನಿರ್ವಹಿಸುತ್ತಿದ್ದು, 94 ಘಟಕಗಳು ಕಾರ್ಯ ನಿರ್ವಹಿಸುತ್ತಿಲ್ಲ.<br><br>ಕಾರ್ಯನಿರ್ವಹಿಸದಿರುವ 94 ಘಟಕಗಳ ಪೈಕಿ, ಅಂತರ್ಗತ (In-built) O&M ಅಡಿ ಹಾಗೂ ಪ್ರತ್ಯೇಕ O&M ಅಡಿ ಇರುವ ಘಟಕಗಳ ವಿವರಗಳು **ಅನುಬಂಧ–2ರಲ್ಲಿ** ಲಗತ್ತಿಸಿದೆ.<br>ಈ 94 ಘಟಕಗಳ ಪೈಕಿ,<br>1. ಅಂತರ್ಗತ (In-built) O&M ಅಡಿ ಇರುವ 65 ಘಟಕಗಳನ್ನು ಸುಸ್ಥಿತಿಯಲ್ಲಿಡುವಂತೆ ಆಯಾ ಏಜೆನ್ಸಿಗೆ ನೋಟಿಸ್ ಮುಖಾಂತರ ಸೂಚಿಸಿಲಾಗಿದ್ದು, Max Aqua ಏಜೆನ್ಸಿಯನ್ನು ಹೊರತುಪಡಿಸಿ ಉಳಿದ ಎಲ್ಲಾ ಏಜೆನ್ಸಿಗಳು ಈ ನಿಟ್ಟಿನಲ್ಲಿ ಅಗತ್ಯ ಕ್ರಮ ವಹಿಸುತ್ತಿದ್ದಾರೆ. Max Aqua ಏಜೆನ್ಸಿಯವರು ಘಟಕಗಳನ್ನು ಸುಸ್ಥಿತಿಯಲ್ಲಿಡಲು ಕ್ರಮ ವಹಿಸದಿದ್ದರಿಂದ, ಸದರಿಯವರ FSD ಅನ್ನು ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. ಅದರನ್ವಯ ಟೆಂಡರ್ ರದ್ಧತಿ ಪ್ರಕ್ರಿಯೆಯಲ್ಲಿದೆ.<br>2. KRIDL ವತಿಯಿಂದ ಹಸ್ತಾಂತರಿಸಿಕೊಂಡಿರುವ ಉಳಿದ 29 ಘಟಕಗಳ ನಿರ್ವಹಣೆಯನ್ನು ಟೆಂಡರ್ ಮುಖಾಂತರ ಪ್ರತ್ಯೇಕ ಏಜೆನ್ಸಿಗೆ ವಹಿಸಲಾಗಿದೆ. |
| ಇ) | ಗ್ರಾಮೀಣ ಪ್ರದೇಶದ ಶುದ್ಧ ಕುಡಿಯುವ ನೀರಿನ ಘಟಕಗಳ ದುರಸ್ಥಿ ಮತ್ತು ನಿರ್ವಹಣೆಗೆ ಸರ್ಕಾರ ಇದುವರೆವಿಗೂ ಕೈಗೊಂಡ ಕ್ರಮವೇನು? (ವಿವರ ನೀಡುವುದು) | ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ ನಿರ್ಮಿಸಿರುವ ಶುದ್ಧ ಕುಡಿಯುವ ನೀರಿನ ಘಟಕಗಳ ಸುಸ್ಥಿತಿಯಲ್ಲಿಡಲು ಟೆಂಡರ್ ಕರಾರಿನಂತೆ Defect Liability Period ಒಳಗೆ ದುರಸ್ಥಿಗೊಳಪಟ್ಟ ಘಟಕಗಳನ್ನು ಸರಿಪಡಿಸುವ ಹೊಣೆಗಾರಿಕೆಯು ಸಂಬಂಧಿಸಿದ ಗುತ್ತಿಗೆದಾರರಿಗೆ ಇರುತ್ತದೆ.<br><br>ಅಲ್ಲದೆ, ಕಾರ್ಯಾಚರಣೆ ಮತ್ತು ನಿರ್ವಹಣೆಯ ಗುತ್ತಿಗೆದಾರರು ಸಹ ಘಟಕಗಳನ್ನು ಸುಸ್ಥಿತಿಯಲ್ಲಿಡುವ ಜವಾಬ್ದಾರಿಯನ್ನು ಕರಾರಿನಲ್ಲಿ ನಿಗಧಿಪಡಿಸಲಾಗಿರುತ್ತದೆ. ಗ್ರಾಮ ಪಂಚಾಯಿತಿಗಳಿಗೆ ನಿರ್ವಹಣೆಗಾಗಿ ವಹಿಸಲಾದ ಘಟಕಗಳನ್ನು ಸುಸ್ಥಿತಿಯಲ್ಲಿಡಲು ಮಾಹೆಯಾನ ಪ್ರತಿ ಘಟಕಕ್ಕೆ ಇಲಾಖೆಯಿಂದ ರೂ.3000.00ಗಳ ಅನುದಾನ ಒದಗಿಸಲಾಗುತ್ತಿದೆ ಹಾಗೂ ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿನ ಇತರೆ ಅನುದಾನಗಳನ್ನು ಬಳಸಿ ಘಟಕಗಳನ್ನು ಸುಸ್ಥಿತಿಯಲ್ಲಿಡಲು ಕಾಲಕಾಲಕ್ಕೆ ಸೂಚನೆಗಳನ್ನು ಸಹ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ನೀಡಲಾಗುತ್ತಿದೆ. |

ಸಂ:ಗ್ರಾಕುನೀ&ನೈಇ 117 ಗ್ರಾನೀಸ(4)2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು

**ಕೆ.ಎಸ್. ಈಶ್ವರಪ್ಪ**
**ಗ್ರಾಮೀಣಾಭಿವೃದ್ಧಿ ಮತ್ತು**
**ಪಂಚಾಯತ್ ರಾಜ್ ಸಚಿವರು**

ಕಲಬುರಗಿ ಜಿಲ್ಲೆಗೆ ಸಂಬಂಧಿಸಿದ ಅನುಬಂಧ-1

| Sl. No. | Agency responsible for installation | No. of Plants Approved | No. of Plants Commissioned | No. of Plants under progress | No. of Plants Working | No. of Plants Not Working | Remarks |
|---|---|---|---|---|---|---|---|
| 1 | Eureka Forbes | 105 | 105 | 0 | 80 | 25 | Inbuilt O&M |
| 2 | Hima Aqua | 13 | 13 | 0 | 7 | 6 | Inbuilt O&M |
| 3 | MS Scientific Aqua | 117 | 107 | 10 | 52 | 55 | Inbuilt O&M |
| 4 | Water Life | 44 | 44 | 0 | 28 | 16 | Inbuilt O&M |
| 5 | K R I D L | 157 | 141 | 16 | 87 | 54 | 141 plants were taken over from KRIDL & 33 plants were taken over from Co-operative society. Out of this total 164 plants, 106 plants which are in working condition are handed over to GP for maintenance and the balance 68 which are not in working condition will be repaired & handed over to GP for maintenance. |
| 6 | Co-operative Society | 33 | 33 | 0 | 19 | 14 | |
| **TOTAL** | | **469** | **443** | **26** | **273** | **170** | |

ಯಾದಗಿರಿ ಜಿಲ್ಲೆಗೆ ಸಂಬಂಧಿಸಿದ ಅನುಬಂಧ-2

| Sl. No. | Agency responsible for installation | Total No. of plants approved & commissioned | No of plants working | No of plants not working | Remarks |
|---|---|---|---|---|---|
| 1 | Max Aqua | 149 | 110 | 39 | Inbuilt O&M |
| 2 | Water Life | 38 | 26 | 12 | Inbuilt O&M |
| 3 | Tata Projects | 17 | 15 | 2 | Inbuilt O&M |
| 4 | Others (Co operative society, SC/ST Agencies etc.) | 45 | 33 | 12 | Inbuilt O&M |
| 5 | KRIDL | 166 | 137 | 29 | 166 plants were taken over from KRIDL. Further, Separate O&M tender called was called & is entrusted to Shri. Laxmi Venkateshwara Agency |
| **Total** | | **415** | **321** | **94** | |

10/12/2020

ಆಯುಕ್ತರು,
ಗ್ರಾ.ಕು.ನೀ. ಮತ್ತು ನೈ. ಇಲಾಖೆ,
ಬೆಂಗಳೂರು.